## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 974 (1186)
ಸದಸ್ಯರ ಹೆಸರು : ಶ್ರೀ. ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 16.03.2020
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಪ್ರಾಥಮಿಕ ಶಾಲೆಯಿಂದ ಪ್ರೌಢಶಾಲೆಗೆ, ಪ್ರೌಢ ಶಾಲೆಯಿಂದ ಪದವಿಪೂರ್ವ ಕಾಲೇಜಿಗೆ ಬಡ್ತಿ ಪಡೆದ ಶಿಕ್ಷಕರಿಗೆ ಕಾಲಮಿತಿ ವೇತನಬಡ್ತಿ ಮಂಜೂರು ಮಾಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಆ. | ಬಡ್ತಿ ಪಡೆದ ಶಿಕ್ಷಕರಿಗೆ ಕಾಲಮಿತಿ ವೇತನ ಬಡ್ತಿ ನೀಡದೇ ಇರುವುದರಿಂದ ಇವರು ಆರ್ಥಿಕ ಸವಲತ್ತಿನಿಂದ ವಂಚಿತರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಆದೇಶದ ಸಂಖ್ಯೆ: ಎಫ್‌ಡಿ 12 ಎಸ್‌ಆರ್‌ಪಿ 2012(8), ದಿನಾಂಕ 14.06.2012ರಲ್ಲಿ ತಿಳಿಸಿರುವಂತೆ ಸೇವಾ ಅವಧಿಯಲ್ಲಿ ಯಾವುದೇ ಪದೋನ್ನತಿ ಪಡೆಯದೇ ಇರುವ ಶಿಕ್ಷಕರಿಗೆ ಮಾತ್ರ 20,25,30 ವರ್ಷಗಳ ಬಡ್ತಿ ಮಂಜೂರಾತಿ ಮಾಡಲು ಅವಕಾಶವಿರುತ್ತದೆ. ಆದರೆ ಪ್ರಾಥಮಿಕ ಶಾಲಾ ಶಿಕ್ಷಕರಿಗೆ ಪ್ರೌಢ ಶಾಲಾ ಸಹ ಶಿಕ್ಷಕರ ಹುದ್ದೆಗೆ ಹಾಗೂ ಪ್ರೌಢ ಶಾಲೆಯಿಂದ ಪದವಿಪೂರ್ವ ಕಾಲೇಜಿಗೆ ಬಡ್ತಿ ಪಡೆದಿರುವ ಶಿಕ್ಷಕರುಗಳಿಗೆ 20,25,30 ವರ್ಷಗಳ ವೇತನ ಬಡ್ತಿ ಮಂಜೂರಾತಿಗೆ ಅವಕಾಶವಿರುವುದಿಲ್ಲ.<br><br>ಇದರಿಂದಾಗಿ ಹಲವಾರು ಪ್ರಕರಣಗಳಲ್ಲಿ ಪ್ರಾಥಮಿಕ/ಪ್ರೌಢ ಶಿಕ್ಷಕರಾಗಿ ಹಾಗೂ ಪದವಿ ಪೂರ್ವ ಉಪನ್ಯಾಸಕರಾಗಿ ಬಡ್ತಿ ಹೊಂದಿದ ಶಿಕ್ಷಕರು/ಉಪನ್ಯಾಸಕರುಗಳಿಗಿಂತ ಬಡ್ತಿ ಹೊಂದದೇ ಇರುವ ಕಾರಣಕ್ಕಾಗಿ ಹೆಚ್ಚುವರಿ ವೇತನ ಬಡ್ತಿಗಳನ್ನು ಪಡೆದ ಶಿಕ್ಷಕರ/ಉಪನ್ಯಾಸಕರ ವೇತನ ಹೆಚ್ಚಾಗಿರುವುದು ಕಂಡುಬಂದಿದೆ. 6ನೇ ವೇತನ ಆಯೋಗದ ಶಿಫಾರಸ್ಸಿನಂತೆ ಈ ಗೊಂದಲವನ್ನು ಹೋಗಲಾಡಿಸುವ ಕುರಿತಂತೆ ಇಡಿ 147 ಎಸ್‌ಓಹೆಚ್ 2015ರಲ್ಲಿ ಆರ್ಥಿಕ ಇಲಾಖೆಯನ್ನು ಸಮಾಲೋಚಿಸಲಾಗಿ, ಆರ್ಥಿಕ ಇಲಾಖೆಯು ಅಭಿಪ್ರಾಯಿಸಿರುವ ಪ್ರಮುಖ ಸಾರಾಂಶವು ಈ ಕೆಳಕಂಡಂತಿದೆ.<br><br>"ಹಿರಿಯ ಮತ್ತು ಕಿರಿಯ ಸರ್ಕಾರಿ ನೌಕರರ ವೇತನದಲ್ಲಿನ ತಾರತಮ್ಯವನ್ನು ನಿವಾರಿಸಲು ಪ್ರಸ್ತುತ ಚಾಲ್ತಿಯಲ್ಲಿರುವ ವೇತನ ಎತ್ತರಿಕೆ(ಹೆಚ್ಚಳ) ನಿಯಮಗಳು/ಆದೇಶಗಳಲ್ಲಿ ಸರ್ವೇಸಾಮಾನ್ಯವಾಗಿ ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಲಾಗಿರುತ್ತದೆ.<br>(ಅ) ಹಿರಿಯ ಮತ್ತು ಕಿರಿಯ ಸರ್ಕಾರಿ ನೌಕರರು ಒಂದೇ ಪದವೃಂದಕ್ಕೆ ಸೇರಿದವರಾಗಿರಬೇಕು ಮತ್ತು<br>(ಆ) ಹಿರಿಯ ಮತ್ತು ಕಿರಿಯ ಸರ್ಕಾರಿ ನೌಕರರ ನಡುವಿನ ವೇತನದಲ್ಲಿನ ಅಸಮಾನತೆಯು ಒಂದೇ ಪದವೃಂದದಲ್ಲಿ ಲಭ್ಯವಿದ್ದ ವೇತನ ಬಡ್ತಿ/ಮುಂಬಡ್ತಿ ಸೌಲಭ್ಯಗಳನ್ನು ಮಂಜೂರು ಮಾಡಿರುವ ಕಾರಣದಿಂದ ಮಾತ್ರ ಉದ್ಭವಿಸಿರಬೇಕು.<br><br>ಪ್ರಸ್ತುತ ಪ್ರಾಥಮಿಕ ಮತ್ತು ಪ್ರೌಢ ಶಾಲಾ ಶಿಕ್ಷಕರ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶಿಕ್ಷಕರು ಅವರು ಧಾರಣೆ ಮಾಡಿದ ಹುದ್ದೆಯಲ್ಲಿ |
| ಇ. | ಸದರಿ ಶಿಕ್ಷಕರಿಗೆ ಕಾಲಮಿತಿ ವೇತನ ಬಡ್ತಿ ಸೌಲಭ್ಯ ಕಲ್ಪಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | |
| ಈ. | ಯಾವ ಕಾಲಮಿತಿಯಲ್ಲಿ ವೇತನ ಬಡ್ತಿ ಸೌಲಭ್ಯ ಕಲ್ಪಿಸಲಾಗುವುದು? | |

ಕ್ರಮವಾಗಿ 10, 15, 20, 25 ಮತ್ತು 30 ವರ್ಷಗಳ ಪದೋನ್ನತಿ ರಹಿತ ಸೇವೆಗಾಗಿ ಲಭ್ಯವಿರುವ ಸೌಲಭ್ಯಗಳನ್ನು ಭಾಗಶ: ಪಡೆದ ನಂತರ ಅಥವಾ ಅವುಗಳನ್ನು ಪಡೆಯುವ ಪೂರ್ವದಲ್ಲಿಯೇ ಕ್ರಮವಾಗಿ ಪ್ರೌಢ ಶಾಲಾ ಮತ್ತು ಪದವಿ ಪೂರ್ವ ಕಾಲೇಜುಗಳ ಶಿಕ್ಷಕರ ಹುದ್ದೆಗೆ ಪದೋನ್ನತಿ ಪಡೆಯುವುದರಿಂದ ಮತ್ತು ಕೆಳಗಿನ ಹುದ್ದೆಯಲ್ಲಿ ಈ ಮೇಲಿನ ಎಲ್ಲಾ ಸೌಲಭ್ಯಗಳನ್ನು ಕಿರಿಯ ಶಿಕ್ಷಕನು ಪಡೆದ ಕಾರಣಕ್ಕೆ ಹಿರಿಯ ಮತ್ತು ಕಿರಿಯ ಶಿಕ್ಷಕರ ವೇತನದಲ್ಲಿ ಉಂಟಾಗಿರುವ ವೇತನ ವ್ಯತ್ಯಾಸವನ್ನು ಹಿರಿಯ ಮತ್ತು ಕಿರಿಯ ಶಿಕ್ಷಕರ ವೇತನದಲ್ಲಿನ ತಾರತಮ್ಯ ಎಂದು ಪರಿಗಣಿಸಲು ಬರುವುದಿಲ್ಲ. ಏಕೆಂದರೆ, ಸದರಿ ತಾರತಮ್ಯವು ಉಂಟಾದ ಅವಧಿಯಲ್ಲಿ ಅವರು ಕಾರ್ಯನಿರ್ವಹಿಸುತ್ತಿರುವ ವೃಂದ ಮತ್ತು ಅದಕ್ಕೆ ನಿಗದಿಪಡಿಸಲಾದ ವೇತನ ಶ್ರೇಣಿ ಪರಸ್ಪರ ಭಿನ್ನವಾಗಿದ್ದು, ಅವುಗಳನ್ನು ಹೋಲಿಸಲು ಬರುವುದಿಲ್ಲವಾದ್ದರಿಂದ ಶಿಕ್ಷಣ ಇಲಾಖೆಯು ಕೋರಿರುವಂತೆ ಹಿರಿಯ ಶಿಕ್ಷಕರ ವೇತನವನ್ನು ಕಿರಿಯ ಶಿಕ್ಷಕರ ವೇತನದ ಸಮಕ್ಕೆ ಎತ್ತರಿಸುವ ಪ್ರಮೇಯ ಉದ್ಭವಿಸುವುದಿಲ್ಲ.

ಮುಂದುವರೆದು, ಒಂದೊಮ್ಮೆ ಹಿರಿಯ ಶಿಕ್ಷಕನು 10 ಮತ್ತು 15 ವರ್ಷಗಳ ಪದೋನ್ನತಿ ರಹಿತ ಸೇವೆಗಾಗಿ ನಿಯಮಾನುಸಾರ ಲಭ್ಯವಿರುವ ಕಾಲಬದ್ಧ ಮುಂಬಡ್ತಿ ಹಾಗೂ ಹಿರಿಯ ವೇತನ ಶ್ರೇಣಿ ಮುಂಬಡ್ತಿ ಸೌಲಭ್ಯಗಳನ್ನು ಪಡೆಯುವುದಕ್ಕೂ ಪೂರ್ವದಲ್ಲಿಯೇ ಪದೋನ್ನತಿ ಪಡೆದಲ್ಲಿ, ಸಂದರ್ಭಾನುಸಾರ ಅಂತಹ ಹಿರಿಯ ಶಿಕ್ಷಕನು ಸದರಿ ಸೌಲಭ್ಯಗಳನ್ನು ಪಡೆಯುವುದಕ್ಕೋಸ್ಕರ ಕೆಳಗಿನ ಹಂತದ ವೇತನ ಶ್ರೇಣಿಯಲ್ಲಿಯೇ ಮುಂದುವರೆಯಲು ಲಿಖಿತ ಅಭಿಮತವನ್ನು ಪದೋನ್ನತಿ ಪಡೆದ 2 ತಿಂಗಳೊಳಗಾಗಿ ಸಲ್ಲಿಸಬಹುದು ಅಥವಾ ಅನುಕೂಲವಿಲ್ಲದ ಸಂದರ್ಭದಲ್ಲಿ ಸದರಿ ಸೌಲಭ್ಯಗಳನ್ನು ಅವನು ಪದೋನ್ನತಿ ಪಡೆದಲ್ಲಿ ಅಂತಹ ಸಂದರ್ಭದಲ್ಲಿ ಹಿರಿಯ ಶಿಕ್ಷಕನು ಕಾರ್ಯನಿರ್ವಹಿಸುತ್ತಿರುವ ವೃಂದಕ್ಕೆ ಕಿರಿಯ ಶಿಕ್ಷಕನು ಪದೋನ್ನತಿ ಪಡೆದಲ್ಲಿ ಅಂತಹ ಸಂದರ್ಭದಲ್ಲಿ ಹಿರಿಯ ಶಿಕ್ಷಕನ ವೇತನ ತಾರತಮ್ಯವನ್ನು ಸರಿಪಡಿಸಲು ಅವಕಾಶಗಳನ್ನು ಕಲ್ಪಿಸಲಾಗಿರುತ್ತದೆ. ಇಂತಹ ಸಂದರ್ಭಗಳಲ್ಲಿ ಅನ್ವಯಿಸುವ ಆದೇಶಗಳಲ್ಲಿನ ನಿಬಂಧನೆಗಳ ಪೂರೈಕೆಗೊಳಪಟ್ಟು ಹಿರಿಯ ಶಿಕ್ಷಕನ ವೇತನವನ್ನು ಕಿರಿಯ ಶಿಕ್ಷಕನ ವೇತನದ ಸಮಕ್ಕೆ ಎತ್ತರಿಸಬಹುದಾಗಿರುತ್ತದೆ".

ಪ್ರಕರಣಕ್ಕೆ ಸಂಬಂಧಿಸಿದ ಈ ಮೇಲಿನ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಶಿಕ್ಷಣ ಇಲಾಖೆಯ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಯು ಒಪ್ಪುವುದಿಲ್ಲವೆಂದು ತಿಳಿಸಿರುತ್ತದೆ. ಈ ಹಿನ್ನೆಲೆಯಲ್ಲಿ ಈಗಾಗಲೇ ಬಡ್ತಿ ಹೊಂದಿದ ಶಿಕ್ಷಕರಿಗೆ ಬಡ್ತಿ ಹೊಂದದ ಕಾರಣಕ್ಕಾಗಿ ಪಡೆಯುವ ಕಾಲಮಿತಿ ಬಡ್ತಿಗಳನ್ನು ನೀಡಲು ಸಾಧ್ಯವಿರುವುದಿಲ್ಲ.

ಸಂಖ್ಯೆ: ಇಡಿ 38 ಎಸ್‌ಓಹೆಚ್ 2020

(ಎಸ್. ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ ಸಚಿವರು